ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 605
ಸದಸ್ಯರ ಹೆಸರು : ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಪೆರಿಫೆರಲ್ ಹೊರ ವರ್ತುಲ ರಸ್ತೆ ನಿರ್ಮಿಸುವ ಬಗ್ಗೆ ಸರ್ಕಾರದ ನಿಲುವೇನು; | ಬೆಂಗಳೂರು ನಗರಕ್ಕೆ ಪ್ರತಿನಿತ್ಯವೂ ಸಂಚರಿಸುವ ವಾಹನ ದಟ್ಟಣೆಯನ್ನು ತಡೆಗಟ್ಟುವ ದೃಷ್ಟಿಯಿಂದ ಪೆರಿಫೆರಲ್ ಹೊರ ವರ್ತುಲ ರಸ್ತೆಯನ್ನು ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ. |
| ಆ) | ಈ ಕಾಮಗಾರಿಯನ್ನು ಕೈಗೊಳ್ಳಲು ಬಿಡುಗೊಡೆ ಮಾಡಿರುವ ಅನುದಾನ ಎಷ್ಟು; | ಸದರಿ ಯೋಜನೆಗಾಗಿ ಭೂ ಪರಿಹಾರ ವೆಚ್ಚಗಳಿಗಾಗಿ ಸರ್ಕಾರದಿಂದ ರೂ. 100.00 ಕೋಟಿ ಗಳನ್ನು ಸಾಲದ ರೂಪದಲ್ಲಿ ಈಗಾಗಲೇ ಬಿಡುಗಡೆ ಮಾಡಲಾಗಿದೆ. |
| ಇ) | ಈ ಹೊರ ವರ್ತುಲ ರಸ್ತೆಗೆ ಬೇಕಾಗಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆಯೇ; | • ಪೆರಿಫೆರಲ್ ಹೊರ ವರ್ತುಲ ರಸ್ತೆ ಭಾಗ-1 ರಲ್ಲಿ 2007 ರಲ್ಲಿ 1810-18.5 ಎಕರೆ ಅಂತಿಮ ಅಧಿಸೂಚನೆಯಾಗಿದ್ದು, 2010 ರಲ್ಲಿ 372-26ಎಕರೆಗೆ ಪ್ರಾರಂಭಿಕ ಅಧಿಸೂಚನೆಯಾಗಿರುತ್ತದೆ. |
| ಈ) | ಹಾಗಿದ್ದಲ್ಲಿ ಎಷ್ಟು ಹೆಕ್ಟೇರ್ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆಯೇ; | • 2007 ರ ಅಂತಿಮ ಅಧಿಸೂಚನೆಯ ನಂತರ ಈ ಕೆಳಕಂಡ 7 ಉದ್ದೇಶಗಳಿಗೆ ಜಮೀನಿನ ಅವಶ್ಯಕತೆಗಳಿದ್ದು, ಒಟ್ಟು 589-13.75 ಎಕರೆ ವಿಸ್ತೀರ್ಣವನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಪ್ರಾರಂಭಿಕ ಅಧಿಸೂಚನೆ ಹೊರಡಿಸಲು ಕ್ರಮವಹಿಸಲಾಗಿರುತ್ತದೆ.<br>i) ನೈಸ್ ಇಂಟಿಗ್ರೇಷನ್ ತುಮಕೂರು ರಸ್ತೆ (61ಎ-17 ½ ಗು)<br>ii) ನೈಸ್ ಇಂಟಿಗ್ರೇಷನ್ ಹೊಸೂರು ರಸ್ತೆ (110ಎ-22ಗು)<br>iii) ಮಿಸ್ಸಿಂಗ್ ಲಿಂಕ್ (63ಎ-3 ¼ ಗು)<br>iv) ಪೆಟ್ರೋನೆಟ್ (11ಎ-33 ½ ಗು)<br>v) ಕ್ಲೋವರ್ ಲೀಫ್ (70ಎ-11ಗು)<br>vi) ಟೋಲ್ ಪ್ಲಾಜಾ (127ಎ-9 ½ಗು)<br>vii) ಸೀಗೇಹಳ್ಳಿ ಗ್ರಾಮದ ಬದಲಿ ಪಂಕ್ತೀಕರಣ (144ಎ-37ಗು) |
| ಉ) | ಭೂ ಮಾಲೀಕರಿಗೆ ಪರಿಹಾರ ಹಣ ಬಿಡುಗಡೆ ಮಾಡಲಾಗಿದೆಯೇ; | ಹೌದು. ಪ್ರಸ್ತುತ 3 ಪ್ರಕರಣಗಳಲ್ಲಿ ಮಾತ್ರ ಭೂ ಪರಿಹಾರ ನೀಡಲಾಗಿರುತ್ತದೆ. |

| | | |
|---|---|---|
| ಊ) | ಪೆರಿಫೆರಲ್ ಹೊರ ವರ್ತುಲ ರಸ್ತೆಯನ್ನು ನಿರ್ಮಿಸಲು ಕಾಲಮಿತಿಯನ್ನು ನಿಗದಿ ಮಾಡಲಾಗಿದೆಯೇ? (ವಿವರ ನೀಡುವುದು) | ಕಾಲಮಿತಿ ನಿಗಧಿಪಡಿಸಿರುವುದಿಲ್ಲ. |

ಸಂಖ್ಯೆ: ನಅಇ 62 ಬೆಂಭೂಸ್ವಾ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ